ಲೋಕವಿಖ್ಯಾತ

# ಸರ್ ಎಂ. ವಿಶ್ವೇಶ್ವರಯ್ಯ

ಕೃಷ್ಣರಾಜ ಸಾಗರ, ಭದ್ರಾವತಿ, ವಿಶ್ವವಿದ್ಯಾನಿಲಯ, ಮೈಸೂರು ಬ್ಯಾಂಕ್ ಇವೆಲ್ಲದರ ಅಂತರಂಗವೇನೆಂಬುದನ್ನು ಒಂದು ಮಾತಿನಲ್ಲಿ ಹೇಳಬೇಕಾದರೆ—ನಮ್ಮ ಜನ ತಮ್ಮ ಕಾಲಮೇಲೆ ನಿಂತು ತಲೆಯೆತ್ತಿ ಲೋಕವನ್ನೆದುರಿಸಬೇಕೆಂಬುದೇ ಅವರ ಸಂತತವಾದ ಧ್ಯೇಯ ಯಾವ ಮಹಾ ಚೈತನ್ಯ ವಿಶ್ವೇಶ್ವರಯ್ಯನವರೆಂಬ ಹೆಸರಿನಿಂದ ನಮ್ಮ ಮುಂದೆ ನೂರುಕಾಲ ಬೆಳಗಿತೋ ಆ ದಿವ್ಯ ತೇಜಸ್ಸು ಇನ್ನು ಮುಂದಕ್ಕೂ ನಮ್ಮನ್ನು ಕಾಯ್ದು ನಮ್ಮ ಪ್ರಗತಿಯನ್ನು ನಡೆಸಲಿ.

—ಡಿ. ವಿ. ಗುಂಡಪ್ಪ.

ಡಾ॥ ವಿಶ್ವೇಶ್ವರಯ್ಯನವರು ನಾಡಿಗೆ ಅದರಲ್ಲಿಯೂ ಮೈಸೂರಿಗೆ ನಾನಾ ರಂಗಗಳಲ್ಲಿ ಅಮಿತವಾದ ಸೇವೆ ಸಲ್ಲಿಸಿದ್ದಾರೆ.

ಶ್ರೀ ಬಿ. ಡಿ. ಜತ್ತಿ.

ಪ್ರಾಚೀನ ಋಷಿವಾಣಿಯಂತೆ ಅವರು ಪೂರ್ಣ ಪುರುಷರೂ ಪೂರ್ಣಾಯುಷ್ಯರೂ ಆದ ಪುಣ್ಯಾತ್ಮರು. ವಿಶ್ವೇಶ್ವರಯ್ಯನವರು ಬುದ್ಧಿಯಿಂದ ಬಾಳಿದರು. ಅವರು ಮೈಸೂರಿನಲ್ಲಿ ಜನಿಸಿದವರಾಗಿ ಅಖಿಲ ಭಾರತದ ಕೀರ್ತಿಯನ್ನು ಸಂಪಾದಿಸಿದರು. ಅವರಿಗೆ ಮೈಸೂರೆಂದರೆ ಬಹಳ ಪ್ರೀತಿ ಅಭಿಮಾನಗಳಿದ್ದವು.

—ಗೋರೂರು ರಾಮಸ್ವಾಮಿ ಅಯ್ಯಂಗಾರ್

ಮೈಸೂರು ರಾಜ್ಯದ ನಿರ್ಮಾಣದಲ್ಲಿ ಅವರು ಸಲ್ಲಿಸಿದ ನಿಷ್ಠಾವಂತ ಸೇವೆಯನ್ನು ನಾನು ಹಲವಾರು ಸಂದರ್ಭಗಳಲ್ಲಿ ಪ್ರಸ್ತಾಪಿಸಿದ್ದೇನೆ. ಭಾರತದ ಔದ್ಯೋಗೀಕರಣಕ್ಕಾಗಿ ಸಮಗ್ರ ಯೋಜನೆಯನ್ನು ರೂಪಿಸಿದವರಲ್ಲಿ ಅವರು

ಮೊದಲಿಗರು. ಅದನ್ನು ನಾವು ಈಗ ನಮ್ಮ ಪಾಂಚವಾರ್ಷಿಕ ಯೋಜನೆಗ
ಮೂಲಕ ರೂಪಕ್ಕೆ ತರುತ್ತಿದ್ದೇವೆ.

—ರಾಜ್ಯಪಾಲರು

ಶ್ರೇಷ್ಠ ಇಂಜಿನಿಯರ್, ಪ್ರತಿಭಾವಂತ ರಾಜನೀತಿಜ್ಞ, ಉಜ್ವ
ದೇಶಭಕ್ತ, ಮಾದರಿ ಮೈಸೂರಿನ ಶಿಲ್ಪಿ ಡಾ|| ಎಂ. ವಿಶ್ವೇಶ್ವರಯ್ಯ.

ಅವರು ಮಹಾ ಪ್ರತಿಭಾವಂತ ಇಂಜಿನಿಯರ್ ಆಗಿ ಮೇಧಾವಂ
ರಾಜನೀತಿಜ್ಞರಾಗಿ, ಉಜ್ವಲ ದೇಶಭಕ್ತರಾಗಿ ನಾಡಿಗೆ ಅಮೋಘ ಸೇವೆ ಸಲ್ಲಿ
ತುಂಬು ಜೀವನ ನಡೆಸಿ ನಿಜವಾದ ಭಾರತ ರತ್ನರೆನಿಸಿಕೊಂಡಿದ್ದರು.

100 ವರ್ಷ 6 ತಿಂಗಳು ಹಾಗೂ 29 ದಿನಗಳು ಬದುಕಿದ್ದು ತುಂಬ
ಹಾಗೂ ಸಾರ್ಥಕ ಜೀವನ ನಡೆಸಿದ ಡಾ|| ಎಂ. ವಿ. ಅವರು ವಿಶ್ವವಿಖ್ಯಾತ
ವ್ಯಕ್ತಿಯಾಗಿದ್ದರು. ಅವರ ಪಿತರು ಸ್ವರ್ಗಸ್ಥರಾದ ದಿನವೇ ತಾವು
ಸ್ವರ್ಗಸ್ಥರಾದರು.

—ಪ್ರಜಾವಾಣಿ

"ಮಾದರಿ ಮೈಸೂರಿನ ನಿರ್ಮಾಪಕರಾದ ಡಾ|| ಎಂ. ವಿ. ಯವರ
ತಮ್ಮ ಅಪ್ರತಿಮ ಸ್ಥೈರ್ಯ, ದೃಢನಿಲುವು ಮತ್ತು ಸಾಧನೆಗಳಲ್ಲಿ ಅದ್ವಿತೀಯ
ರಾಗಿದ್ದಾರೆ. ಅಂತಹ ಅಸಾಧಾರಣ ವ್ಯಕ್ತಿಯು ಮೈಸೂರಿನ ನೆಲದಮೇಲ
ಜನಿಸಲು ಅನೇಕ ಶತಮಾನಗಳು ಬೇಕಾದೀತು." ಭಾರತಕ್ಕೂ ಅವರ
ಸಲ್ಲಿಸಿರುವ ಸೇವೆ. ಅದ್ವಿತೀಯವಾಗಿದ್ದು ಅದನ್ನು ಯಾರೂ ಸರಿಗಟ್ಟ
ಲಾರರು. ನೂರು ವರ್ಷಗಳ ತುಂಬು ಜೀವನ ನಡೆಸಿರುವುದೇ ಅವ
ಸಾಧನೆಯ ಶ್ರೇಷ್ಠ ಹೆಗ್ಗಳಿಕೆ. ತಮ್ಮ ಕಾರ್ಯ ಸಾಧನೆಯ ಸ್ಮಾರಕಗಳನ್ನು
ಬಿಟ್ಟು ಹೋಗಿರುವ ಅವರು ಚಿರ ನೆನಪಿನಲ್ಲಿ ಉಳಿಯುತ್ತಾರೆ.

—ಶ್ರೀ ಕಂಠಿ

ಅವರು ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಅತಿಶ್ರೇಷ್ಠ ಪರಿಣಿತರೊಬ್ಬರಾಗಿ
ಪ್ರಸಿದ್ಧರಾಗಿದ್ದುದರಿಂದ ಜತೆಗೆ ಸರ್ವೋಚ್ಚಮಟ್ಟದ ಸಂಪ್ರದಾಯಬದ್ಧ ಜೀವ

ನಾಚರಣೆ, ವಿನಯ, ಸಂಪನ್ನತೆ, ಹಿರಿದಾದ ವಾಸ್ತವಿಕ ದೃಷ್ಟಿ ಮತ್ತು ಕಲ್ಪನಾ ಪ್ರತಿಭೆಗಳಿಂದ ಬೆಳಗಿ ಭಾರತದ ವರಪುತ್ರರೊಬ್ಬರಾಗಿದ್ದರು. ಡಾ|| ಎಂ. ವಿ. ಅವರ ದೂರದೃಷ್ಟಿ, ಆಲೋಚನಾಪರತೆ, ಸಾಧಕ ಶಕ್ತಿಗಳ ಪೂರ್ಣ ಪ್ರಯೋಜನ ಪಡೆಯುವ ಭಾಗ್ಯ ಮೈಸೂರಿನದಾಗಿತ್ತು. ಈ ರಾಜ್ಯ ದಲ್ಲಿ ಅವರ ಈ ಘನವ್ಯಕ್ತಿತ್ವ ಸಾಧನೆಗಳ ಸಂಕೇತಗಳು ಹಲವಿವೆ. ಡಾ|| ಎಂ. ವಿ. ಯವರು 1860ರಲ್ಲಿ ಸೆಪ್ಟಂಬರ್ 15ರಂದು ಕೋಲಾರ ಜಿಲ್ಲೆಯ ಮುದ್ದೇನಹಳ್ಳಿಯಲ್ಲಿ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದರು. ಚಿಕ್ಕಬಳ್ಳಾಪುರದಲ್ಲಿ ಅವರ ಆರಂಭದ ಶಿಕ್ಷಣ ನಡೆಯಿತು. ಬಾಲ್ಯದಿಂದಲೇ ಜೀವನದಲ್ಲಿ ಶಿಸ್ತು, ಶ್ರಮದುಡಿಮೆ ಬೆಳಸಿಕೊಳ್ಳುತ್ತಾ ಬಂದರು. ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡು 1875ರಲ್ಲಿ ಬೆಂಗಳೂರಿಗೆ ಬಂದು ಶ್ರದ್ಧೆಯಿಂದ ವ್ಯಾಸಂಗ ಮುಂದುವರೆಸಿ 1881ರಲ್ಲಿ ಬಿ. ಎ. ಡಿಗ್ರಿ ಪಡೆದರು. ಇರಲು ಮನೆಕೂಡ ಇಲ್ಲದೆ ಕಷ್ಟಪಟ್ಟು ಪಾಠ ಗಳನ್ನು ಹೇಳಿ ಜೀವನ ನಿರ್ವಹಿಸುತ್ತಾ ಕಾಲೇಜ್ ವ್ಯಾಸಂಗ ಮುಗಿಸಿದರು.

1883ರಲ್ಲಿ ಪೂನಾ ವಿಜ್ಞಾನ ಕಾಲೇಜಿನಿಂದ ಇಂಜನಿಯರಿಂಗ್ ಪದವಿ ಪಡೆದರು. ಮುಂಬೈ ಪ್ರಸಿಡೆನ್ಸಿಗೆ ಮೊದಲಿಗರಾಗಿ ಅವರು ತೇರ್ಗಡೆ ಹೊಂದಿದ್ದರು. ನಾಲ್ಕು ತಿಂಗಳನಂತರ ಅವರು ಮುಂಬೈ ಸರಕಾರದಲ್ಲಿ ಅಸಿಸ್ಟೆಂಟ್ ಇಂಜಿನಿಯರಾಗಿ ಸೇರಿ 1908ರಲ್ಲಿ ಸೂಪರಿಂಟೆಂಡಿಂಗ್ ಇಂಜ ನಿಯರಾಗಿ ನಿವೃತ್ತರಾದರು. ಅವರು ಕಂಡು ಹಿಡಿದ "ಆಟೋ ಮ್ಯಾಟಿಕ್ ಗೇಟ್"ಗಳ ಬಳಕೆಯಿಂದ ಪುಣೆಗೆ ಸಾಕಷ್ಟು ನೀರು ಸರಬರಾಜಾಗಲು ಸಾಧ್ಯ ವಾಯಿತು. ಮುಂಬೈ ಮತ್ತು ಮೈಸೂರಿನ ಮಾರಿ ಕಣಿವೆಗಳಲ್ಲಿ ಅವರು ಬಳಕೆಗೆ ತಂದ ಬ್ಲಾಕ್ ನೀರಾವರಿ ವ್ಯವಸ್ಥೆಯೂ ಅವರ ಪ್ರತಿಭೆಗೆ ನಿದರ್ಶನ.

ಪುಣೆಯಲ್ಲಿ ಡಾ|| ರಾನಡೆ ಮತ್ತಿತರರ ಬೆಂಬಲದಿಂದ ಡಾ|| ಎಂ. ವಿ. 1891ರಲ್ಲಿ ಹೀರಾಬಾಗ್ ಕ್ಲಬ್ ಆರಂಭಿಸಿದರು. ಆ ನಗರದಲ್ಲಿ ತಾವಿದ್ದ 14 ವರ್ಷಗಳಲ್ಲಿ ಮಹಾದೇವ ಗೋವಿಂದ ರಾನಡೆ, ಗೋಪಾಲ ಕೃಷ್ಣ ಗೋಖಲೆ ಮುಂತಾದ ಪ್ರಸಿದ್ಧ ವ್ಯಕ್ತಿಗಳ ಸಂಪರ್ಕ ಪಡೆದಿದ್ದರು.

1908ರಲ್ಲಿ ಮುಂಬೈ ಸರಕಾರದಿಂದ ವಿಶ್ರಾಂತಿ ಪಡೆದು 1909
ಹೈದರಾಬಾದಿನಲ್ಲಿ ವಿಶೇಷ ಇಂಜನಿಯರಾಗಿದ್ದು, ಡಾ॥ ಎಂ. ವಿ. ಯವ
1909ರ ಅಕ್ಟೋಬರಿನಲ್ಲಿ ಮೈಸೂರಿನಲ್ಲಿ ಚೀಫ್ ಇಂಜಿನಿಯರ್ ಹು
ಸ್ವೀಕರಿಸಿದರು. ಮೂರು ವರ್ಷಗಳನಂತರ ಸಂಸ್ಥಾನದ ದಿವಾನ್ ಪದ
ಗೇರಿದರು. ಅವರ ಸಾಧನೆಗಳು ರಾಜ್ಯಕ್ಕೆ ಒಂದು ನವಸ್ವರೂಪವನ್ನ
ಕೊಟ್ಟವು. ಡಾ॥ ಎಂ. ವಿ. ಯವರ ಆಡಳಿತ–ಸೇವೆಗಳು–ದಕ್ಷತೆ–ನಿ
ಶಿಸ್ತುಗಳಿಗೆ ಹೆಸರಾಗಿತ್ತು. ಸ್ವಲ್ಪಮಟ್ಟಿಗೆ ಜನಪ್ರಿಯತೆ ಕುಗ್ಗುವಂತಾದರ
ಲೆಕ್ಕಿಸದೆ ಅವರ ಆಡಳಿತದಲ್ಲಿ ಶಿಸ್ತು, ಶ್ರಮ ದುಡಿಮೆಗಳಿಗೆ ಪ್ರಾಮು
ನೀಡುತ್ತಿದ್ದರು. ನಿಷ್ಪಕ್ಷಪಾತ ಆಡಳಿತಗಾರರೆಂದು ಡಾ॥ ಎಂ. ವಿ. ಹೆಸ
ವಾಸಿಯಾಗಿದ್ದರು. ಅವರು ದಿವಾನರಾಗಿದ್ದಾಗ ಅವರ ಬಂಧು ಬಳಗದವ
ಸರಕಾರಿ ನೌಕರಿಗೆ ಸೇರುವುದೇ ಕಷ್ಟವಾಗಿತ್ತು. ಬಡವರಾದ ತಮ್ಮ ಬಂ
ಗಳ ಹಲವಾರು ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ಹಣ ಸಹಾಯ ಮಾಡು
ದ್ದರು. ಅವರು ಅಖಿಲ ಭಾರತ ತಯಾರಿಕೆಗಾರರ ಸಂಘದ ಅಧ್ಯಕ್ಷರಾ
ದ್ದರು. ಭಾರತದ ಅನೇಕ ವಿಶ್ವವಿದ್ಯಾನಿಲಯಗಳು ಗೌರವ ಪ್ರಶಸ್ತಿಗಳನ್ನಿ
ಅವರ ದೇಶಸೇವೆಯನ್ನು ಪ್ರಶಂಸಿಸಿವೆ.

————

ಏಕಾಗ್ರ ಚಿತ್ತತೆಯ ಪ್ರತೀಕ

# ಗೋವಿಂದಪೈ

[ಸ್ಥಳ : ಮಂಜೇಶ್ವರ ಜನನ : ೧೮೮೩ ಮರಣ : ೧೯೬೩]

ಮಂಜೇಶ್ವರದಲ್ಲಿ ಗೋವಿಂದ ಪೈ ಆಗಿದ್ದ ಜೀವ ಇಂದಿನದಲ್ಲ. ಎಷ್ಟೋ ಜನ್ಮಗಳಲ್ಲಿ ಸಂಸ್ಕೃತಿ ಪಥದಲ್ಲಿ ಈ ವರೆಗೆ ನಡೆದದ್ದು. ಸರ್ವದಾ ಸ್ವತಂತ್ರ, ಅಪರಾಧೀನ ಸತ್ವ ಅವರದು. ಮಂಜೇಶ್ವರದ ಮನೆಯಲ್ಲಲ್ಲದೆ ಮಂಗಳೂರಲ್ಲಿ ಪ್ರೀತಿಯ ತಮ್ಮಂದಿರ—ಅವರ ಮಕ್ಕಳ ಮನೆಯಲ್ಲಿ ಕೂಡ ಉಳಿಯದೆ, ಗೂಡು ಸೇರಿಕೊಳ್ಳ ಬಯಸುತ್ತಿದ್ದ ಚೇತನ ಅವರದು. ಪೈಗಳ ಮನಸ್ಸು ಸರಳ ನಿರ್ಮಲವಾದದ್ದು. ಬಿಚ್ಚು ಹೃದಯದ ನುಡಿ. ಸ್ನೇಹ ಸಂಪತ್ತಿ, ದುರ್ದಮ್ಯ ಚಿತ್ತವೃತ್ತಿ ಅವರ ಸ್ವಭಾವ ಲಕ್ಷಣ. ಹಟ ಸ್ವಭಾವದ ಅವರು ಕನ್ನಡದಲ್ಲಿ ಗೋವಿಂದ ಪೈ ಎಂದು ಬರೆಯಬೇಕು ಎಂದು ಹಠ ಹಿಡಿದು ಸಾಧಿಸಿದರು. ಯಾವ ಆರ್ಥಿಕ ಕಾರ್ಪಣ್ಯಕ್ಕೂ ಸಿಗದೆ ಶ್ರೀಮಂತಿಕೆಯಿಂದ ತಮ್ಮ ಜೀವನವನ್ನು ನಡೆಸಿದರು. ಗೋವಿಂದ ಪೈ ಕಾಲ, ಬದುಕು ವಿದ್ಯೆಗೆ ಮೀಸಲಾಗಿದ್ದು ಫ್ರೆಂಚ್, ಜರ್ಮನ್, ಪರ್ಶಿಯನ್, ಇಟಾಲಿಯನ್, ಗ್ರೀಕ್, ಸಂಸ್ಕೃತ, ಲ್ಯಾಟಿನ್, ಪಾಲಿ, ಪ್ರಾಕೃತ, ತಮಿಳು, ಕೊಂಕಣಿ, ತುಳು, ಮರಾಠಿ, ಹಿಂದಿ, ಬಂಗಾಳಿ—ಭಾಷೆಗಳಲ್ಲಿ ವಿಶೇಷ ಜ್ಞಾನ ಪಡೆದಿದ್ದರು. ಕನ್ನಡದ ಸೇವೆಗೆ ಅವನ್ನು ವಿನಿಯೋಗಿಸಿದರು. ನೋವು–ಹರ್ಷ, ಕೀರ್ತಿ–ಅಪಕೀರ್ತಿ, ಲಾಭ–ನಷ್ಟಗಳ ಲೆಕ್ಕವಿರಲಿಲ್ಲ. ಹೇಳಬೇಕಾದ್ದನ್ನು ಹೇಳಿದರು. ಪ್ರಾಸ ಬಿಟ್ಟು blank verse ಬರೆದವರಲ್ಲಿ ಅವರು ಮೊದಲ ಮುಂದಾಳು. ಸಣ್ಣ ವಯಸ್ಸಿನಲ್ಲಿ ತೀರಿಕೊಂಡ ಪೈಯವರ ಭಾರ್ಯೆಗೆ ಸ್ಮೃತಿ ನಿವೇದನೆ ನಂದಾದೀಪ. ಅವರ "ವೈಶಾಖಿ", "ಗೊಲ್ಗೋಥ", "ಪ್ರಭಾಸ", ಮುಂತಾದ ಕವನಗಳು ಹಿರಿಯವು. "ಹೆಬ್ಬೆರಳು" "ಚಿತ್ರ ಭಾನು" ನಾಟಕಗಳು ಚೆಲುವಾದವು.

ಆಕೃತಿ ದಿಟ್ಟ, ಪುಷ್ಟಮೀಸೆ; ತಲೆಗೂದಲು ನರೆತ ಸಿಂಗ
ದಾಯಲು; ಅವರ ವೇಷವೋ: ಒಂದು ಖಾದಿ ಮೊಂಡು ತೋಳಿ
ಬನೀನು ಉಟ್ಟ ಒಂದು ದಟ್ಟಿ, ಮೈಮೇಲೆ ಭುಜದಿಂದಿಳಿದು ಒಂದು ತುಂಡ
ಟವಲು, ಇದ್ದರಿತ್ತು ಇಲ್ಲವಾದರಿಲ್ಲ. ಪೈಗಳು ಸಾತ್ವಿಕತೆಯ ಲಕ್ಷಣಗಳಾದ
ಸತತ ಜ್ಞಾನಾನ್ವೇಷಣೆ, ಆಲೋಕಾಂಗೀಕಾರ, ಚಿಂತನೆ, ಅಂತರಾತ
ಹಿತನಿಷ್ಠೆ ಇವುಗಳನ್ನೊಳಗೊಂಡಿದ್ದರು. ಬರಹಗಾರರೂ ತಂತಮ್ಮ ಗು
ಯಿಂದ ಕಣ್ತೊಳಲದೆ ವಿಶ್ರಮಿಸದೆ, ಜಾಗ್ರತೆಯಾಗಿ, ನಿಧಾ
ವಾಗಿ, ಸರ್ವಾತ್ಮನಾಜ್ಞಾಯತ್ತ ಕೆಲಸದ ಹಾದಿಯಲ್ಲಿ ಸಾಗುತ್ತಿರಬೇಕೆಂಬುದ
ಪೈಯವರ ಜೀವಿತದ ಉದ್ದೇಶ. ಅವರ ಒಂದೊಂದು ಕಾರ್ಯ, ಲೇಖ
ನಡವಳಿಕೆ ಏಕಾಗ್ರಚಿತ್ತತೆಯ ನಿಷ್ಠೆಯಿಂದ ಹೊರಹೊಮ್ಮಿದುದು. ಎಂದಿಗ
ಪ್ರಚಾರ ಬಯಿಸಿದವರಲ್ಲ. ಮದರಾಸು ಸರ್ಕಾರ ಅವರನ್ನು ರಾಷ್ಟ್ರಕ
ಎಂದು ಗೌರವಿಸಿತು. ಅವರ ಆತ್ಮಕ್ಕೆ ಶಾಂತಿ ಕೋರುವವರು ಮಂಜೇಶ್ವ
ವನ್ನು ಕನ್ನಡ ನಾಡಿಗೆ ಸೇರಿಸುವುದು, ಅವರ ಬರಹಗಳನ್ನೆಲ್ಲ ಬೃಹ
ಸಂಚಿಕೆಗಳ ಮಾದರಿಯಲ್ಲಿ, ಸುಂದರವಾಗಿ, ಅಚ್ಚುಮಾಡಿ ಜನತೆಗೆ ಸಿಗುವಂ
ಮಾಡುವುದು. ಅದರ ಮೂಲಕ ಅವರ ಎರಡು ಮುಖ್ಯ ಕರ್ತವ್ಯಗಳನ
ನೆರವೇರಿಸಬೇಕಾಗಿದೆ.



# ರೆವರೆಂಡ' ಚೆನ್ನಪ್ಪ ಉತ್ತಂಗಿಯವರು

ದಿವಂಗತ ಉತ್ತಂಗಿಯವರನ್ನು ಕನ್ನಡದ ಸಾಹಿತಿಗಳೊಬ್ಬರು "ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ ; ಎಂದವನದೆಲ್ಲವನ್ನೂ ಬಲ್ಲವರು ಇವರೊಬ್ಬರು" ಎಂದು ಪ್ರಶಂಶಿಸಿದ್ದಾರೆ. ಈ ಮಾತಿನ ಸತ್ಯತೆಗೆ ಅವರ ಸರ್ವಜ್ಞ ವಚನದ ಹತ್ತಾರು ಆವೃತ್ತಿಗಳೇ ಸಾಕ್ಷಿಯಾಗಿವೆ. ಶ್ರೀಯುತರು ತಮ್ಮನ್ನು ತಾವೇ "ತಿರುಳ್ಗನ್ನಡದ ತಿರುಕ" ಎಂಬುದಾಗಿ ಕರೆದುಕೊಂಡಿದ್ದಾರೆ. ಉತ್ತಂಗಿಯವರದು ಆಕರ್ಷಣೀಯವಾದ ವ್ಯಕ್ತಿತ್ವವೆನ್ನಬಹುದು. ದುಂಡು ಮೊಗದ ಪ್ರಸನ್ನವದನಚಿತ್ತರಾದ ಶ್ರೀಯುತರು ವಯೋವೃದ್ಧರೂ ಮಾತ್ರವಲ್ಲದೇ ಜ್ಞಾನವೃದ್ಧರೂ ಹೌದು. ಸರ್ವಜ್ಞನ ಕರ್ಮಕಾಂಡದಲ್ಲಿ ಮಿಂದ ಏಕೈಕ ವ್ಯಕ್ತಿ ಇವರೆಂದರೆ ಅತಿಶಯೋಕ್ತಿಯೇನಲ್ಲ. ಉತ್ತಂಗಿಯವರ ಮನೆತನ ವೀರಶೈವರದಾದರೂ ಇವರ ತಾತ ಚೆನ್ನಪ್ಪಗೌಡರು ಶಾಂತಿಯನ್ನು ಅರಿಸಿ ಕ್ರೈಸ್ತಮತಕ್ಕೆ ಸೇರಿದವರು. ಕ್ರೈಸ್ತಮತದ ಪ್ರಚಾರಕರಾಗಿ ನಿಂತ ಶ್ರೀಯುತರು ಜಾತಿ-ಮತ ಭೇದವನ್ನೇ ಅರಿಯದಂತಹ ಶುದ್ಧ ಸಿದ್ಧರು. ಆರು ಮಕ್ಕಳ ತಂದೆ ಉತ್ತಂಗಿಯವರು ತಮ್ಮ ಇಳಿವಯಸ್ಸಿನಲ್ಲಿಯೇ ತಮ್ಮ ಹೆಂಡತಿಯನ್ನು ಕಳೆದುಕೊಂಡರು. ತತ್ವಕ್ಕಾಗಿ ಮಾರುಹೋದ ಶ್ರೀಯುತರಿಗೆ ಸುಖವೆಂಬುದು ದೂರದ ಬಯಲಾಗಿತ್ತು. ಹುಟ್ಟು ಬಡವರಾದರೂ ನಿಷ್ಕಾಮ ಕರ್ಮಯೋಗಿಗಳವರು.

ಧಾರವಾಡದ ರೆವರೆಂಡ್ ಉತ್ತಂಗಿ ಚನ್ನಪ್ಪನವರ ಸರ್ವಜ್ಞ ವಚನವನ್ನು ಮೈಸೂರು ಸರಕಾರದ ಸಾಹಿತ್ಯಾಭಿವೃದ್ಧಿ ಶಾಖೆಯವರು ಕೊಂಡುಕೊಂಡು ಅವರಿಗೆ ಕೃತಜ್ಞತೆಯನ್ನು ತೋರಿಸಿದ್ದಾರೆ. ಕನ್ನಡದ ಮುಂದಿ ಕಲ್‌ಬುರ್ಗಿಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠವನ್ನು ನೀಡಿ ತಮ್ಮ ಗೌರವವನ್ನು ಸೂಚಿಸಿದ್ದಾರೆ. ಶ್ರೀಯುತರ ಸಂಶೋಧನೆ ನಾಡಿಗೆ ಹಿರಿಯಾಸ್ತಿಯಾಗಿ ಉಳಿದಿದೆ.

—೦—

## ಮಾನಸಿಕ ಚಿತ್ರಣದ ವ್ಯಕ್ತಿ

# ತ್ರಿ ವೇ ಣಿ

ಸ್ಥಳ: ಮೈಸೂರು  ಜನನ: ೧೯೨೮  ಮರಣ :೧೯೬೩]

ಇಪ್ಪತ್ತಕ್ಕೂ ಹೆಚ್ಚು ಉತ್ತಮ ಪುಸ್ತಕಗಳನ್ನು ಕನ್ನಡ ದೇವಿಯ ಪದತಲದಲ್ಲಿ ಅರ್ಪಿಸಿ, ಖ್ಯಾತಿಗಳಿಸಿ, ಕನ್ನಡ ಜನತೆಯನ್ನು ತಬ್ಬಲಿಗೈದು ಹೊರಟುಹೋದ ತ್ರಿವೇಣಿ ಸಾಹಿತಿಗಳ ವಂಶದಲ್ಲಿ ಜನಿಸಿದರು. ಅವರು ಕನ್ನಡ ಸಾಹಿತ್ಯಾಚಾರ್ಯರಾದ, ಬಿ. ಎಂ. ಶ್ರೀ ಅವರ ತಮ್ಮನ ಪುತ್ರಿ- ಮೈಸೂರು ಮಹಾರಾಜಾ ಕಾಲೇಜಿನ ಮನಶ್ಶಾಸ್ತ್ರ ಪದವೀಧರರು. ಮನೋ ವಿಕಲರ, ಹಾಗೂ ಮನಸ್ಸಿನ ಹಲವಾರು ಸಮಸ್ಯೆಗಳ ಬಗ್ಗೆ ವಿಶೇಷ ಆಸಕ್ತಿ ಯಿತ್ತು. ಹುಚ್ಚಾಸ್ಪತ್ರೆಯ ವಿವರ ಸಂಗ್ರಹಣವನ್ನು ಅವರ "ಬೆಕ್ಕಿ ಕಣ್ಣು", "ಮುಚ್ಚಿದ ಬಾಗಿಲು", "ದೂರದ ಬೆಟ್ಟ", "ಶರಪಂಜರ" "ಮೊದಲ ಹೆಜ್ಜೆ", ಮುಂತಾದ ಕೃತಿಗಳಲ್ಲಿ, ಕನ್ನಡ ಸಾಹಿತ್ಯ ಪ್ರಕಾರ ಹೊಸ ಪ್ರಯೋಗದಲ್ಲಿ ಕಾಣಬಹುದು. ಅವರ ಸಾಹಿತ್ಯ ಜೀವನಕ್ಕೆ ಹೊ ತಾಗಿರಲಿಲ್ಲ. ಅವರ ಕತೆಗಳ ಪಾತ್ರಗಳೆಲ್ಲ ನಿತ್ಯಜೀವನದ ನೈ ವ್ಯಕ್ತಿಗಳು. ವಿಶೇಷವಾಗಿ ಹೆಣ್ಣು ಮತ್ತು ಹೆಣ್ಣಿನ ಸಮಸ್ಯೆಗಳನ್ನು ಅವ ತಮ್ಮ ಕೃತಿಗಳಲ್ಲಿ ಹೃದಯಂಗಮವಾಗಿ ಚಿತ್ರಿಸಿ ಯಶಸ್ವಿಯಾಗಿದ್ದಾ ಏಕೆಂದರೆ ಅದನ್ನು ಸ್ತ್ರೀ ಲೇಖಕರೇ ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲರು.

ಕಲಿತ ಹೆಂಗಸರ ಸಮಸ್ಯೆಯನ್ನು "ಕಂಕಣ" ಮತ್ತು "ಮುಕ್ತಿ" ಯ ಚಿತ್ರಿಸಿದ್ದಾರೆ. ಆರು ಜನ ಓದಿದ ಹುಡುಗಿಯರು ಜೀವನಕ್ಕೆ ಹೇಗೆ ಹೊ ಕೊಳ್ಳುತ್ತಾರೆಂಬುದು ಇವೆರಡರ ವಸ್ತು.

ತ್ರಿವೇಣಿಯವರದು ಮನ ಮುಟ್ಟುವ, ಸಹಜ ಸುಂದರ, ಸರಳಶೈ ಕಬ್ಬಿಣದ ಕಡಲೆಯ ಪದಗಳನ್ನವರು ಬಹುದೂರವಿರಿಸುತ್ತಿದ್ದರು. ಮಾ

ಹುವ ರೀತಿಯಲ್ಲೇ ಬರೆಯುತ್ತಿದ್ದುದರಿಂದ ಅವರ ಕೃತಿಗಳು ನಿಜ ಜೀವನದ ಸುಂದರ ಚಿತ್ರಗಳಾಗಿದ್ದವು. 1952 ನೆಯ ಇಸವಿಯಲ್ಲಿ ಕನ್ನಡದ ಪ್ರಪ್ರಥಮ ಕಥೆಗಾರ್ತಿ, ತ್ರಿವೇಣಿಯವರಿಗೆ ಹೆಸರುತಂದ ಚೊಚ್ಚಲ, ಕೃತಿ ''ಹೂವುಹಣ್ಣು''.

ಹೊಸ ಬರಹಗಾರರು—ಬರಹಗಾರ್ತಿಯರು ಬೆಳಕಿಗೆ ಬರಬೇಕಾದರೆ ನಮ್ಮ ನಾಡಿನಲ್ಲಿ ವಿಪರೀತ ಅಡ್ಡಿ ಆತಂಕಗಳಿವೆ ಎಂಬುದನ್ನವರು ಬಹಳ ದುಃಖದಿಂದ ಹೇಳಿದರು. ಅವರ ಅನೇಕ ಸಣ್ಣ ಕತೆಗಳು ಬೆಂಗಳೂರು ಆಕಾಶವಾಣಿಯಿಂದ ಬಿತ್ತರಿಸಲ್ಪಟ್ಟಿವೆ. ಅವರ " ಬೆಕ್ಕಿನ ಕಣ್ಣು " ಕಾದಂಬರಿಯ ರೇಡಿಯೋ ರೂಪಾಂತರ ಮುಂಬೈ ಆಕಾಶವಾಣಿಯಿಂದ 1963ನೇ ಜೂನ್ ತಿಂಗಳಲ್ಲಿ ಪ್ರಸಾರವಾಗಿತ್ತು. ಅವರ "ಅವಳ ಮನೆ" "ತಾವರೆ ಕೊಳ" ಕಾದಂಬರಿಗಳು ಮತ್ತು "ಸಮಸ್ಯೆಯ ಮಗು" ಕಥಾ ಸಂಕಲನಕ್ಕೆ ನಮ್ಮ ಮೈಸೂರು ರಾಜ್ಯಸರ್ಕಾರದ ಸಾಹಿತ್ಯ ಪ್ರಶಸ್ತಿಗಳು ದೊರಕಿವೆ.



# ಆ ನ ಂ ದ

[ಸ್ಥಳ: ಅಜ್ಜಂಪುರ ಜನನ: ೧೯೦೨ ಮರಣ: ೧೯೬೩]

ಆನಂದ ಎಂಬ ಕಾವ್ಯನಾಮದಿಂದ ಖ್ಯಾತರಾಗಿದ್ದ ಕನ್ನಡದ ಕತೆಗಾರ ಶ್ರೀ ಎ. ಸೀತಾರಾಮುಗೆ 61 ವರ್ಷವಯಸ್ಸಾಗಿತ್ತು. ಅವರಿಗೆ ಪತ್ನಿ ಇಬ್ಬರು ಪುತ್ರರು ಮತ್ತು ಒಬ್ಬ ಪುತ್ರಿಯು ಇದ್ದಾರೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಒಂದು ದೊಡ್ಡ ಹೆಸರಾಗಿದ್ದ ದಿವಂಗತರ ಕೃತಿಗಳಿವು:— ೧) ಕಥಾ ಸಂಕಲನಗಳು "ಬೇವು-ಬೆಲ್ಲ" "ಜೋಯಿಸ್ಸರ ಚಾಡಿ" "ಕೆಲವು ಕಥೆಗಳು" "ಮಾಟ ಗಾತಿ" 'ಚಂದ್ರ ಗ್ರಹಣ' "ಸ್ವಪ್ನ ಜೀವಿ" "ಸಂಸಾರಶಿಲ್ಪಿ" "ಶಿಲ್ಪಿಸಂಕುಂ" ಮತ್ತು ಅಶ್ರುಬಾಷ್ಪ. ೨) ನಾಟಕಗಳು:—"ದಹನಚಿತ್ರ" "ವೀರಯೋಧ" ಮತ್ತು "ಸುಷಿ ವಿಜಯ". ೩) ಅನುವಾದಗಳು "ಪುರುಷಾಮೃಗ" "ಉಗ್ರಪರೀಕ್ಷೆ" (ಮೂರು ಭಾಗಗಳಲ್ಲಿ) "ಟಾಲ್ಸ್‌ಟಾಯ್ ಆತ್ಮಕಥನ" "ಶಾಲಾ ಉಪಾಧ್ಯಾಯಿನಿಯೊಬ್ಬಳ ದಿನಚರಿ" "ಪಕ್ಷಿಗಾನ" "ಹರಟೆ" ಆನಂದಲಹರಿ. ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿಜ್ಞಾನ ಪದವೀಧರರಾದ ದಿವಂಗತರು ವಿದ್ಯಾರ್ಥಿ ದೆಸೆಯಲ್ಲಿ ಒಳ್ಳೆಯ ಕ್ರಿಕೆಟ್ ಆಟಗಾರರಾಗಿದ್ದರು. ವರ್ಣಚಿತ್ರ ರಚನೆ ಅವರ ಅತ್ಯಂತ ಪ್ರಿಯ ಹವ್ಯಾಸವಾಗಿತ್ತು. ಅವರು ಅನುವಾದ ಮಾಡಿದ "ಈಸೋಪನ ಲೋಕ ನೀತಿ ಕತೆಗಳು" ಪುಸ್ತಕಕ್ಕೆ ಕಳೆದ ವರ್ಷ ರಾಜ್ಯ ಸರ್ಕಾರದ ಪ್ರಶಸ್ತಿ ಸಿಕ್ಕಿತು. ಅವರ ಮೊದಲನೆಯ ಕಥೆ "ಭಿಕ್ಷಾಂದೇಹಿ", ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಬರೆದುದು.

ಆನಂದರ ವ್ಯಹಾರ ನಾಮ ಅಜ್ಜಂಪುರದ ಸೀತಾರಾಮ್ ಎಂದು. ಹುಟ್ಟಿದ್ದು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಆವನಹಟ್ಟಿಯಲ್ಲಿ 1902ರಲ್ಲಿ. ಮೊದಲ ನೋಟಕ್ಕೂ ಮಾತಿಗೂ ಒರಟು. ಆದರೆ ಮನಸ್ಸು ಮೃದು. ಪಂಪನ ಊರಾದ ಬನವಾಸಿ ಪ್ರಾಂತ್ಯಕ್ಕೆ ಸೇರಿದವರು ಇವರು. ಚಿಕ್ಕಂದಿನಲ್ಲಿ ಒಳ್ಳೆಯ ಶಿಕ್ಷಣವನ್ನು ಪಡೆದವರು. ಇವರ ತಂದೆ ಶಿವಮೊಗ್ಗಿಯಲ್ಲಿ ಲಾಯರು. ಮಾಧ್ಯಮಿಕ ಹಾಗೂ ಪ್ರೌಢಶಾಲೆಯ ವ್ಯಾಸಂಗ ಶಿವಮೊಗ್ಗಿಯಲ್ಲಿ. ಈ ವಯಸ್ಸಿನಲ್ಲೇ ಇವರಲ್ಲಿ ಸಾಹಿತ್ಯಭಿರುಚಿಯು ಬೆಳೆ

ಯಿತು. ಭಕ್ತಿ ಭಂಡಾರಿ ಬಸವಣ್ಣನವರನ್ನೂ ವಚನ ಧರ್ಮಸಾರವನ್ನೂ ನಾಗರಿಕವನ್ನೂ ಕನ್ನಡಕ್ಕೆ ನೀಡಿದ ಪ್ರಸಿದ್ಧ ಲೇಖಕರೂ ಸಹೃದಯರೂ ಆದ ದಿವಂಗತ ಎಂ. ಆರ್. ಶ್ರೀನಿವಾಸಮೂರ್ತಿ ಅವರೂ; ಕಾಳಿದಾಸನ ಮೇಘ ಸಂದೇಶವನ್ನು ಕನ್ನಡಕ್ಕೆ ನೀಡಿದ ಉದ್ದಾಮ ಪಂಡಿತರೂ ರಸಿಕರೂ ಆದ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳೂ ಆಗ ಇವರಿಗೆ ಗುರುಗಳಾಗಿದ್ದರು. ಇದೇನು ಕಡಿಮೆ ಅದೃಷ್ಟವೇ? ಮುಂದೆ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಯನ. ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರಗಳನ್ನು ಅರಿಸಿಕೊಂಡ ಸೀತಾರಾಂ ಅವರು ಸೆಂಟ್ರಲ್ ಕಾಲೇಜು ಸೇರಿ ಅಲ್ಲಿ ಕನ್ನಡದ ಅಧ್ಯಾಪಕರಾಗಿದ್ದ ತಳುಕಿನ ವೆಂಕಣ್ಣಯ್ಯನವರ ಪ್ರೀತಿಗೆ ಪಾತ್ರರಾಗಿ ಅವರ ಪ್ರೋತ್ಸಾಹದಿಂದ ಸಾಹಿತ್ಯ ಮುಂದುವರೆಸಿದರು. ಆಗ ಸೀತಾರಾಂ 'ಆನಂದ'ರಾದರು.

ಕ್ರಿಕೆಟ್ ಮೈದಾನದಲ್ಲಿ ದಾಂಡು ಬೀಸುತ್ತಿದ್ದ ಅವರ ಕೈ ಈಗ ಲೇಖಣಿಯನ್ನು ಹಿಡಿದು ಬಣ್ಣದ ಕುಂಚವನ್ನೂ ಆಡಿಸಿದಾಗ ಕತೆಗಾರ ಆನಂದರ ಉದಯವಾಯಿತು. ಮೊದಲಕತೆ "ಭವತಿ ಭಿಕ್ಷಾಂದೇಹಿ" (೧೯೨೨) ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಯಿತು. (ಇದು ಆಗಿನ ಜೀವನದ ದೃಷ್ಟಿ) ಅಲ್ಲಿಂದ ಆರಂಭವಾದ ಅವರ ಸಣ್ಣಕತೆಗಳ ನಿರ್ಮಾಣಕಾರ್ಯ, ಮುವತ್ತಕ್ಕೂ ಹೆಚ್ಚು ಕತೆಗಳನ್ನು ಕನ್ನಡ ಸಾಹಿತ್ಯದೇವಿಗೆ ಅರ್ಪಿಸಿತು. ವೆಂಕಣ್ಣಯ್ಯನವರಿಂದ ಬೆಳಕಿಗೆ ಬಂದರೆ, ಸಣ್ಣಕತೆಗಳ ಶ್ರೀನಿವಾಸರು ಅವರ ಲೇಖನಕ್ಕೆ ಆದರ್ಶರಾದರು. ಆದರೆ ಕತೆಗಾರ ಅನಂದರ ಜೀವನ ದೃಷ್ಟಿ, ಅನುಕಂಪ ಜೀವನವನ್ನು ಆಳವಾಗಿ ನೋಡುವ ಹವ್ಯಾಸ, ಘಟನೆಯೊಂದನ್ನು ಎಳೆಎಳೆಯಾಗಿ ಬಿಡಿಸಿ ತೋರಿಸುವ ಕೈಚಳಕ, ವಿವಿಧ ವರ್ಣಗಳ ಎರೆಚಾಟ-ಇವೆಲ್ಲ ಅವರ ಕತೆಗಳ ವೈಶಿಷ್ಟ. "ಬೇವು ಬೆಲ್ಲ—ಕೊನೇ ಎಂಟಾಣೆ" ಯಶಸ್ವಿ ಕಂಡವು. ಹೆಂಡತಿಯ ಕಾಗದ, ನಾವು ಹಾಗೆಯೇ, ಪದ್ಮಪಾಕ, ರಾಧೆಯ ಕ್ಷಮೆ-ತುಂಬಾ ಯಶಸ್ವಿಯಾದ ಪ್ರಣಯ ಕತೆಗಳಾಗಿದ್ದು "ನಾವು ಹಾಗೆಯೇ"ಗೆ ೧೯೨೭ರಲ್ಲಿ ಕತೆಯು ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸುವರ್ಣ ಪದಕ ಸನ್ಮಾನವನ್ನು ಪಡೆಯಿತು.

"ಹೆಂಡತಿಯ ಕಾಗದ"ದ ಶೈಲಿ (ಕಥನ) ತಂತ್ರ, ವಸ್ತು ಎಲ್ಲವೂ ಆನಂದರ ಅದ್ಭುತ ಶಕ್ತಿಗೆ ಸಾಕ್ಷಿಯಾಗಿದೆ. ಆನಂದರ ಪ್ರಸಿದ್ಧಿ ತುಂಬಾ ಹರಡಿದುದು "ನಾನು ಕೊಂದ ಹುಡುಗಿ" ಪ್ರಕಟವಾದಾಗ. ಕತೆಗಾರ ಆನಂದರು ಚಿತ್ರಗಾರರೂ ಹೌದು ಎಂಬುದಕ್ಕೆ ಈ ಕತೆ ಸಾಕ್ಷಿ. ಸಣ್ಣ ಕತೆಯ ಬೆಡಗು ಬಿಂಕಗಳನ್ನೂ ಹಲವು ಮುಖಗಳನ್ನೂ ತೋರಿಸಿ ಇಂದಿಗೂ ಅದ್ವಿತೀಯರಾಗಿರುವ ಶ್ರೀನಿವಾಸರ ಹಾದಿಯಲ್ಲಿ ನಡೆದ ಮೊದಲಿಗರು ಇವರು. ಅವರ ಹರಟೆಗಳಲ್ಲಿ (ಆನಂದಲಹರಿ) ಅವರ ಹಳೆಯ ಲಹರಿಯನ್ನು ಹೊಸದಾಗಿ ಕಾಣಬಹುದು. "ದಹನ ಚಿತ್ರ" "ವೀರಯೋಧ" ಎಂಬ ಎರಡು ನಾಟಕಗಳನ್ನು ಇವರು ಅನ್ಯ ಭಾಷೆಯಿಂದ ದತ್ತು ತಂದರು. ಇವರ ಶೈಲಿಯ ಹಳೆಯ ಚಕಮುಕಿಯನ್ನು ತಮ್ಮ ಕೃತಿಗಳಿಗೆ ನಾಮಕರಣ ಮಾಡುವ ಜಾಣ್ಮೆಯನ್ನು ಇವರ ಸಣ್ಣ ಕತೆಗಳಲ್ಲಿ ಕಾಣಬಹುದು.



13

## ವ್ಯಕ್ತಿ ಚಿತ್ರಣ ಪ್ರವೀಣ

# ದ. ಬಾ. ಕುಲಕರ್ಣಿ

[ಸ್ಥಳ: ಮುಂಬಯಿ        ಜನನ: ೧೯೧೬        ಮರಣ: ೧೯೬೩]

ದಿ. ದ. ಬಾ. ಕುಲಕರ್ಣಿಯವರದು ಅಪೂರ್ವ ರಸಸೃಷ್ಟಿ, ಹಾಗೂ ಒಂದು ಹೊಸಬಗೆಯ ಅನುಭವ ಸೃಷ್ಟಿಯಾಗಿರುತ್ತಿತ್ತು. ದ. ಬಾ. ಅವರದು ದಿಟ್ಟಮನಸ್ಸಿನ, ಬಿಚ್ಚುಮಾತಿನ ವೃತ್ತಿ. ಯಾವಾಗ, ಯಾರನ್ನು ಕುರಿತು ಎಂಥಾ ನಗೆಮಾತನ್ನು ಆಡುವರೆಂಬ ಭರವಸೆ ಇರುವುದಿಲ್ಲ. ಅವರೂ ಒಳ್ಳೆಯ ಲಲಿತ ಸಾಹಿತ್ಯದ ಲೇಖಕರಾದಂತೆ, ಸುರಿತ ವಿಮರ್ಶಕರೂ ಹೌದು. ಅವರ ಅಸಾಧಾರಣ ಸ್ಮರಣಾಶಕ್ತಿಗೆ, ಅವರ ವ್ಯಕ್ತಿ ಚಿತ್ರಣವೇ ಸಾಕ್ಷಿ. ಹೃದಯ ಸ್ತಂಭನದಿಂದ ಕುಲಕರ್ಣಿಯವರು ಒಮ್ಮೆಗೇ ನೆನ್ನೆಯವರಾದರು. ಕೇವಲ ಮುಲ್ಕಿ ಪರೀಕ್ಷೆ ಓದಿದ್ದರು. ಹೈಸ್ಕೂಲು ಕಾಲೇಜು ಕಂಡವರಲ್ಲ. ಆದರೆ ಅವರು ಪುಸ್ತಕ ಮಾರಾಟಗಾರರಾಗಿ, ಪ್ರಕಾಶಕರಾಗಿ, ಜೀವನ ಆರಂಭಿಸಿ, ಒಳ್ಳೆಯ ಸಾಹಿತಿಯಾಗಿ ಕನ್ನಡ ಸಾಹಿತ್ಯೋದ್ಯಾನದಲ್ಲಿ ಕಂಗೊಳಿಸಿದರು. ಮನೆಯಲ್ಲೇ ಇಂಗ್ಲೀಷು ಕಲಿತರು. "ನಾನು ಕಂಡ ಗೌರಮ್ಮ" ಅವರಿಗೆ ಕೀರ್ತಿ ತಂದಿತು. "ಹಕ್ಕಿ ನೋಟ", ಈಚೆಗೆ ಬಂದ "ಸೀಮಾ ಪುರುಷರು" ನಮ್ಮ ಕವಿಗಳಿಗೆ, ಕಲಾವಿದರಿಗೆ ಚಿರಯೌವನ ನೀಡಿವೆ. 'ಹಕ್ಕಿ ನೋಟ' ವ್ಯಕ್ತಿಚಿತ್ರಗಳನ್ನು ಮೋಹಿಸಿ ಅವರು ಮತ್ತಷ್ಟು ಬರೆಯಬಾರದೇ ಎಂದು ಓದುಗರಿಗೆ ಅನ್ನಿಸದಿರದು. ನಿರ್ಮಲ ಚಿತ್ತದಿಂದ ಓದುವವರಿಗೆ ಕತೆಯ ಚಿತ್ರಣ ಲೇಖಕನ ಅಭಿಪ್ರಾಯವನ್ನೇ ಪ್ರತಿಫಲಿಸುತ್ತದೆಂದರೆ ಸಾಕಲ್ಲವೆ. ಅವರ ಕಾಗದಗಳ ತುಂಬ ಯೋಜನೆಯ ಉತ್ಸಾಹ, ಅವರು ಬರೆಯುತ್ತಿದ್ದ "ಗೋವಾ" ಕಾದಂಬರಿ ಪೂರ್ಣವಾಗಿದ್ದರೆ "ಪರಿಹಾರ"ದ ಸೀಕ್ವೆಲ್ ಬರೆಯುತ್ತಿದ್ದರೇನೋ. ಅವರ ಕಾಗದಗಳಲ್ಲಿ ಕೆಲವು ಕಹಿಯಾಗಿದ್ದು, ಅವರು ಜೀವನದಲ್ಲಿ ಎಷ್ಟು ನೊಂದರು, ಬೆಂದರೆಂಬುದು ವ್ಯಕ್ತವಾಗಿದೆ. ದ. ಬಾ. ಕು. ಒಳ್ಳೆಯ ಸಾಹಿತಿ, ನಿಜ. ಅವರಿಗೆ ಬದುಕುವ ಹಂಬಲವಿತ್ತು.

ಮತ್ತಷ್ಟು ಬರೆಯುವ ಆಸೆಯಿತ್ತು. ಅವರಿಗೆ ಸರ್ಕಾರದ ಗೌರವದಿಂದ ಕೀರ್ತಿ ಬರಬೇಕಾಗಿಲ್ಲ. ಅಂಥವರನ್ನು ಗೌರವಿಸುವುದರಿಂದ ಸರ್ಕಾರಕ್ಕೆ ಘನತೆ ಅಷ್ಟೆ.

ನಲವತ್ತೇಳರ ಅವರು ಸತ್ತದ್ದು ಹೃದಯ ಸ್ತಂಭನದಿಂದ. ಏಕೆಂದರೆ ಅಂಥ ವ್ಯಕ್ತಿ ಈ ಸಮಾಜದಲ್ಲಿ ಬದುಕಲು ಸಾಧ್ಯವಿಲ್ಲ. ಮತ್ತು ಅವರ ದೊಡ್ಡ ಕುಟುಂಬವನ್ನು ಅನಾಥರಾಗಿ ಬಿಟ್ಟು ಹೋಗಿದ್ದಾರೆ "ಸತ್ತಮೇಲೆ ಗೌರವಿಸುವುದು" ಎಷ್ಟಾದರೂ ನಮ್ಮ ನಾಡಿನ ಹಿರಿಮೆಯಲ್ಲವೆ.

---

### ರಂಗಭೂಮಿಯ ರಾಜ

## ಎಂ. ವಿ. ಸುಬ್ಬಯ್ಯನಾಯ್ಡು

ಈ ಶತಮಾನದ ಎರಡನೇ ದಶಕದಲ್ಲಿ ಗಾಯಕನಾಗಿ, ಸಣ್ಣ ಪುಟ್ಟ ಪಾತ್ರಗಳ ನಟನಾಗಿ ತಮ್ಮ ಕಲಾ ಜೀವನ ಆರಂಭಿಸಿದ ಶ್ರೀ ನಾಯ್ಡು ಅವರು ತಮ್ಮ ಸಹಜ ಅಭಿನಯ ಸಾಮರ್ಥ್ಯ, ಕಲಾನಿಷ್ಟ, ಕಾರ್ಯಸಾದನ, ಪಟುತ್ವಗಳಿಂದ ಅನತಿ ಕಾಲದಲ್ಲೇ ಖ್ಯಾತಿವೆತ್ತ ಕಲಾವಿದರಾದರು. ಆಗ ನಾಡಿನಲ್ಲಿ ಹೆಸರಾಗಿದ್ದ ಹಲವು ನಾಟಕ ಸಂಸ್ಥೆಗಳಲ್ಲಿ ಅನೇಕ ವರ್ಷಗಳಕಾಲ ಪ್ರಮುಖ ನಟರಾಗಿದ್ದು, ಮುಖ್ಯ ಪಾತ್ರಗಳಲ್ಲಿ ಸೊಗಸಾದ ಪ್ರತಿಭೆಯನ್ನು ತೋರಿ ಅಗಾದವಾದ ಜನಮಣ್ಣನೆಯನ್ನು ಪಡೆದಿದ್ದರು. ಕೆಲಕಾಲಾನಂತರ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ ಎಂಬ ಹೆಸರಿನಲ್ಲಿ ಸ್ವಂತ ನಾಟಕ ಸಂಸ್ಥೆಯನ್ನು ಆರಂಭಿಸಿದರು. ಆದರೆ ಸಹಜ ಸತ್ವ ಸಾಮರ್ಥ್ಯಗಳಿಂದ ಕೂಡಿದ್ದ ಶ್ರೀ ನಾಯ್ಡುರವರು ಸುಲಭವಾಗಿ ಸಿನಿಮಾ ತಂತ್ರಕ್ಕೂ ಹೊಂದಿ ಕೊಂಡರಷ್ಟೆ, ಅಷ್ಟೇ ಅಲ್ಲ, ಕನ್ನಡ ಚಲನ ಚಿತ್ರಕಲೆಯ ಸ್ಥಾಪಕರೊಬ್ಬ ರೆನಿಸಿ ಪ್ರತಿಷ್ಟಿತ ಸಾಧಕರಾದರು. ಕನ್ನಡದ ಪ್ರಪ್ರಥಮ ವಾಕ್ಚಿತ್ರ "ಸತಿ ಸುಲೋಚನ" (1934) ದಲ್ಲಿ ನಾಯಕನ ಪಾತ್ರ ವಹಿಸಿದ್ದರು ಶ್ರೀ ನಾಯು ಮತ್ತು ಕನ್ನಡದ ಇನ್ನೊಬ್ಬ ಹಿರಿಯ ನಟರಾದ ಶ್ರೀ ಆರ್. ನಾಗೇಂದ್ರರಾವ್ ಜೊತೆಗೂಡಿ ಸಾಹಿತ್ಯ ಸಾಮ್ರಾಜ್ಯ ನಾಟಕಮಂಡಲಿ ಹೆಸರಿನಲ್ಲಿ ಕನ್ನಡ ಚಿತ್ರೋದ್ಯಮದ ಮೊದಲ ವರ್ಷಗಳಲ್ಲಿ ತಯಾರಿಸಿದ "ವಸಂತಸೇನಾ" "ಹರಿ ಶ್ಚಂದ್ರ" ಮುಂತಾದ ಚಿತ್ರಗಳು ಕನ್ನಡದ ಅತ್ಯುತ್ತಮ ಚಿತ್ರಗಳ ಪಂಕ್ತಿಯಲ್ಲಿ ಸ್ಥಾನ ಪಡೆದಿವೆ. ಶ್ರೀ ನಾಯ್ಡು ಶ್ರೀಮತಿ ಲಕ್ಷ್ಮೀಬಾಯಿ ಜೋಡಿ ಸುಪ್ರ ಸಿದ್ಧವಾಗಿತ್ತು.

1958ರಲ್ಲಿ ಮತ್ತೆ ಚಿತ್ರನಿರ್ಮಾಪನಕ್ಕೆ ತೊಡಗಿ "ಭಕ್ತ ಪ್ರಹ್ಲಾದ" ಚಿತ್ರವನ್ನು ತಯಾರಿಸಿದರು. ಆಮೇಲೆ ಪುನಃ ರಂಗಭೂಮಿಗೆ ಹಿಂದಿರುಗಿ ಮೂರು ವರ್ಷಗಳ ಹಿಂದೆ ನಾಟಕ ಪ್ರದರ್ಶನವನ್ನು ಆರಂಭಿಸಿದರು. ಶ್ರೀ ಸುಬ್ಬಯನಾಯ್ಡು ಹುಟ್ಟುಕಲಾವಿದರಾಗಿದ್ದರು. ಸುಪುಷ್ಟ ನಿಲುವು,

ಗೌರವರ್ಣ ಅಗಲವಾದ ಕಣ್ಣುಗಳು ಪೌರುಷ ಶಕ್ತಿ ಸಾಮರ್ಥಸೂಚಿಸು ವಂತಿದ್ದ ಮೀಸೆ ಇವುಗಳಿಂದ ಕೂಡಿದ್ದ ಘನವಂತ ವ್ಯಕ್ತಿಯಾಗಿದ್ದರು. ಅವರು ಒಳ್ಳೆಯ ಶಾರೀರ ಸಂಪತ್ತನ್ನೂ ಪಡೆದಿದ್ದರು. ಪೌರಾಣಿಕ ಕಥೆಗಳ ವೀರೋಚಿತ ಪಾತ್ರಗಳನ್ನು ಅದ್ಭುತವಾಗಿ ರಸವತ್ತಾಗಿ ನಿರೂಪಿಸುವುದರಲ್ಲಿ ಸಿದ್ಧಹಸ್ತರಾಗಿದ್ದ ಶ್ರೀ ನಾಯ್ಡುರವರ ಅಂಬರೀಷ ಹರಳಯ್ಯ (ಬಸವೇಶ್ವರ), ರಾವಣ (ಭೂ ಕೈಲಾಸ), ದಶರಥ (ರಾಮಾಯಣ), ಹರಿಶ್ಚಂದ್ರ, ಕಬೀರ್ ವಿಕ್ರಾಂತ (ರಾಜ ಭಕ್ತಿ) ಪಾತ್ರಗಳು ಹಾರ್ದಿಕ ಪ್ರಾಮಾಣಿಕ ಅಭಿನಯಕ್ಕೆ ಹೆಸರಾಗಿದ್ದು ಚಿರಸ್ಮರಣೀಯವಾಗಿವೆ. ದಿವಂಗತ ನಾಯ್ಡುರವರು ವಾಸ್ತವ ವಾಗಿ ಕೊನೆಯವರೆಗೂ ರಂಗಭೂಮಿಯಮೇಲೆ ಇದ್ದರು. ಗುರುವಾರ ರಾತ್ರಿ "ಅಂಬರೀಷ" ನಾಟಕದಲ್ಲಿ ಪಾತ್ರವಹಿಸಿದ್ದರು. ವೀರ ಹಾಗೂ ಕರುಣಾರಸ ಪ್ರಧಾನವಾದ ಪಾತ್ರಗಳನ್ನು ಅಭಿನಯಿಸಿ ಜನತೆಯನ್ನು ಆಕ ರ್ಷಿಸಿ ಅವರ ಹೃದಯದಲ್ಲಿ ಒಂದು ಸ್ಥಾನವನ್ನುಗಳಿಸಿ, ಕನ್ನಡ ರಂಗಭೂಮಿ ಯನ್ನು ಬೆಳಗಿ ಕಣ್ಮರೆಯಾದ ವ್ಯಕ್ತಿ ಶ್ರೀ ಎಂ. ವಿ. ಸುಬ್ಬಯ್ಯನಾಯ್ಡು. ಅವರು ತಮ್ಮ ಕಲಾ ಪ್ರತಿಭೆ ನಟನಾ ಸಾಮರ್ಥ್ಯದಿಂದ ನಿಷ್ಠೆಯಿಂದ ಕನ್ನಡ ರಂಗಭೂಮಿಗೆ ಅಮಿತವಾದ ಸೇವೆಯನ್ನು ಸಲ್ಲಿಸಿದ್ದಾರೆ. ಶ್ರೀ ಸುಬ್ಬಯ್ಯ ನಾಯ್ಡು ಅವರು ಪ್ರತಿಭಾವಂತ ನಟರಾಗಿದ್ದರು. ೧೯೨೪ರಲ್ಲಿ ಗುಬ್ಬಿ ಕಂಪನಿಗೆ ಸೇರಿ ಅಲ್ಲಿ ಅನೇಕ ಉತ್ತಮ ಪಾತ್ರಗಳನ್ನು ಅಭಿನಯಿಸುತ್ತಿದ್ದರು. ಅವರು ರಂಗಭೂಮಿಗೆ ಬಂದು ತಮ್ಮ ಕಲಾಶಕ್ತಿಯಿಂದ ಇಡೀ ಜನರನ್ನು ಆಕರ್ಷಿಸುತ್ತಿದ್ದರು. ಶ್ರೀ ಸುಬ್ಬಯ್ಯನಾಯ್ಡು ಅವರು ಪ್ರತಿಯೊಂದು ಪಾತ್ರ ವನ್ನೂ ಬಹು ಶ್ರದ್ಧೆ ಭಕ್ತಿಯಿಂದ ಅಭಿನಯಿಸುತ್ತಿದ್ದರು. ದಿವಂಗತರ ಎಷ್ಟು ಜನಪ್ರಿಯರಾಗಿದ್ದರೆಂಬುದಕ್ಕೆ ಅವರ ಶವಯಾತ್ರೆಯಂದು ಜನರು ವ್ಯಕ್ತ ಪಡಿಸಿದ ಗೌರವವೊಂದೇ ಸಾಕ್ಷಿ. ಅವರ ನಟನಾ ಪ್ರತಿಭೆಯನ್ನು ಇಂದುಕೂಡ ಆಂಧ್ರದಲ್ಲಿ ಸ್ಮರಿಸಿಕೊಳ್ಳುವರು. ರಂಗಭೂಮಿಗೆ ಅವಿಚ್ಛಿನ್ನವಾಗಿ ಅವಿಶ್ರಾಂ ವಾಗಿ ದುಡಿದು ಮಡಿದರು. ತಮ್ಮ ರಂಗಭೂಮಿಯ ಸಾಧನೆಗಾಗಿ ನಾಡಿ ನಾನಾಕಡೆ ಜನರಿಂದ ಪ್ರಚಂಡ ಗೌರವ, ಸನ್ಮಾನಗಳನ್ನು ಗಳಿಸಿದ್ದ ಶ್ರೀ ಸುಬ್ಬಯ್ಯನಾಯ್ಡುರವರಿಗೆ ಕಳೆದ ವರ್ಷ ಸಂಗೀತ ನಾಟಕ ಅಕಡಮಿ ಪ್ರಶ ದೊರೆತಿತ್ತು.

